ಈ ದೇವತಾ ತ್ರಿಮೂರ್ತಿಗಳ ಆಜ್ಞೆಯಿಂದ ಎಲ್ಲ ಬ್ರಾಹ್ಮಣರು ಶ್ರೀರಾಮಚಂದ್ರನ ಯಜ್ಞಕಾರ್ಯದಲ್ಲಿ ಭಾಗವಹಿಸಲಿಕ್ಕೂ ಅವನಿಂದ ದಾನ ಧರ್ಮ ಪಡೆಯಲಿಕ್ಕೂ ಸಮ್ಮತಿಸಿದರು. ಹರಿಹರ ಬ್ರಹ್ಮಾದಿ ದೇವತೆಗಳು ಆ ಶ್ರೀರಾಮಚಂದ್ರ ಕೈಕೊಂಡ ಧರ್ಮಾರಣ್ಯ ತೀರ್ಥದ ಜೀರ್ಣೋದ್ಧಾರ ಕಾರ್ಯದಲ್ಲಿ ಸಹಾಯ ಸಲ್ಲಿಸಲು ಸ್ವಯಂ ಸಮಕ್ಷಮದಲ್ಲಿ ನಿಂತುಕೊಂಡರು. ಅದರ ಅಂಗವಾಗಿ ನಡೆಯುವ ಯಜ್ಞ ಕಾರ್ಯಗಳಿಗಾಗಿ ಪರ್ವತಾಕಾರವಾದ ಸುಂದರ ಹಾಗೂ ವಿಶಾಲವಾದ ವೇದಿಕೆಯು ನಿರ್ಮಿಸಲ್ಪಿಟ್ಟತು. ಅದರ ಮೇಲೆ ಅನೇಕ ದ್ರವ್ಯಶಾಲಾ, ಗೃಹಶಾಲಾ, ಬ್ರಹ್ಮಶಾಲಾ ಮುಂತಾದವುಗಳ ನಿರ್ಮಿತಿ ಆಯಿತು. ಈ ಎಲ್ಲ ಶಾಲೆಗಳಲ್ಲಿ ದ್ರವ್ಯ ಭಾಂಡಾರ, ಪಾತ್ರೆ, ಗೃಹೋಪಯೋಗಿ ವಸ್ತುಗಳು ಸಂಗ್ರಹಿಸಲ್ಪಟ್ಟವು. ಕೋಟಿ ಕೋಟಿ ಸುವರ್ಣ ಮುದ್ರೆಗಳು ವಸ್ತ್ರ, ಧನಧಾನ್ಯಗಳನ್ನೂ ಬಗೆ ಬಗೆಯ ಧಾತುಗಳನ್ನೂ ಇರಿಸುವ ಸಲುವಾಗಿ ಪ್ರತ್ಯೇಕ ಬೇರೆ ಬೇರೆ ವಿಶಾಲವಾದ ಪ್ರಕೋಷ್ಠಗಳು ರಚಿಸಲ್ಪಟ್ಟವು ಯೋಗ್ಯರಾದ ವಿದ್ವಾಂಸರಿಗೆ ವಿಪುಲವಾಗಿ ನಗನಾಣ್ಯ ವಸ್ತ್ರ ಆಭರಣಗಳನ್ನು ಕೊಟ್ಟನು.

## ಧರ್ಮಾರಣ್ಯದಲ್ಲಿ ಶ್ರೀರಾಮನ ಧರ್ಮಕಾರ್ಯ

ಪ್ರತಿಯೊಬ್ಬ ಬ್ರಾಹ್ಮಣನಿಗೆ ಹತ್ತು ಹಿಂಡುವ ಹಸುಗಳನ್ನೂ ದಕ್ಷಿಣೆ ಸಹಿತವಾಗಿ ಶ್ರೀರಾಮನು ದಾನ ನೀಡಿದನು. ಒಟ್ಟು ಆ ಯಜ್ಞದಲ್ಲಿ ಶ್ರೀರಾಮನು ವೇದ ವಿದ್ವಾಂಸರಿಗೆ ನಾಲ್ಕು ಸಾವಿರ ಊರುಗಳನ್ನು ದಾನವಾಗಿ ಕೊಟ್ಟನು. ದೇಶದ ಬೇರೆ ಬೇರೆ ಮಂಡಲಗಳಲ್ಲಿ ಅಧಿಪತಿಗಳಾಗಿ ಉದ್ಯೋಗ, ವ್ಯಾಪಾರ ಮತ್ತು ಸಹಾಯಕ ಸೇವೆಗಳನ್ನು ಸಲ್ಲಿಸುವ ಶೂದ್ರರು ಒಂದು ಲಕ್ಷ ಇಪ್ಪತ್ತೈದು ಸಾವಿರ ಜನ ಕಟಿಬದ್ಧರಾಗಿ ನಿಂತುಕೊಂಡಿದ್ದರು. ಶ್ರೀರಾಮನ ಆದೇಶವನ್ನು ಪಾಲಿಸುವ ಈ ಮಂಡಲಾಧಿಪತಿಗಳಿಗೆ ಮಾಂಡಲಿಕರು ಎಂದು ಹೆಸರು. ಈ ಎಲ್ಲ ಮಾಂಡಲಿಕರಿಗೆ ಅಲ್ಲಿ ಮರಳಿ ಬಂದು ಧರ್ಮಾರಣ್ಯದಲ್ಲಿ ನೆಲಿಸಿದ ವೇದಶಾಸ್ತ್ರ ವಿದ್ವಾಂಸರ ಸೇವೆಯನ್ನು ಕಡ್ಡಾಯವಾಗಿ ಮಾಡಬೇಕೆಂದು ಶ್ರೀರಾಮನು ಕಟ್ಟಪ್ಪಣೆ ಮಾಡಿದ. ಈ ಪ್ರತಿಷ್ಠಾವಿಧಿಯ ಜೊತೆಗೆ ಶ್ರೀರಾಮಚಂದ್ರನು ತನ್ನ ಕುಲದ ಮೂಲ ಪುರುಷನಾದ ಸೂರ್ಯನಾರಾಯಣನ ಪ್ರತಿಷ್ಠೆಯನ್ನು ಮಾಡಿದನು. ಇದರಂತೆ ಬ್ರಹ್ಮ, ಶ್ರೀಮಾತಾ, (ಭಟ್ಟಾರಿಕಾ) ಶ್ರೀಹರಿ, ಮಹಾಶಕ್ತಿ, ಮುಂತಾದ ದೇವ ದೇವತೆಯರನ್ನು ಪ್ರತಿಷ್ಠೆ ಮಾಡಿದ ಆ ದೊರೆ. ವಿಘ್ನ ನಿವಾರಣೆಗಾಗಿ ದಕ್ಷಿಣದ ಬಾಗಿಲದ ಬಳಿ ಗಣಪತಿ ಹಾಗೂ ಅನ್ಯ ದೇವತೆಗಳ ಸ್ಥಾಪನೆಯನ್ನು ಮಾಡಲಾಯಿತು.

ಸರ್ವಸ್ವಾಮಿಯಾದ ಶ್ರೀರಾಮಚಂದ್ರನು ಏಳು ಅಂತಸ್ತಿನ ಭವ್ಯ ಭವನವನ್ನು ಕಟ್ಟಿಸಿದ. ಮತ್ತು ''ಈ ಧರ್ಮಾರಣ್ಯದಲ್ಲಿ ಯಾರಾದರೂ ಮಂಗಳಕಾರ್ಯ ಜಾತಕರ್ಮ. ಅನ್ನಪ್ರಾಶನ, ಮುಂಡನ ಮುಂತಾದ ಕರ್ಮಗಳನ್ನು ಮಾಡಿದರೆ ಮತ್ತು ಯಜ್ಞಕರ್ಮಗಳಲ್ಲಿ ಲಕ್ಷ ಹೋಮ ಮತ್ತು ಕೋಟಿ ಹೋಮಗಳನ್ನು ಮಾಡಿದರೆ ಇಂಥ ಸಂದರ್ಭದಲ್ಲಿ ಅನ್ನ, ವಸ್ತ್ರ, ಹಸು, ಹಿರಣ್ಯ, ರಜತ ಮುಂತಾದವುಗಳ ದಾನವನ್ನು ಬ್ರಾಹ್ಮಣ, ಶೂದ್ರ,ದೀನ, ಅನಾಥ ಅಂಧರಿಗಾಗಿ ಕೊಡಬೇಕು. ಈ ಕಾರ್ಯದಲ್ಲಿ ಮೊದಲು ನಿರ್ವಿಘ್ನವಾಗಿ ಕಾರ್ಯವು ಕೊನೆಗಾಣಬೇಕೆಂದು ಬಕುಲಾದಿತ್ಯ, ಮತ್ತು ಶ್ರೀಮಾತೆಯರಿಗಾಗಿ ಕೆಲವು ಭಾಗವನ್ನು ತೆಗೆದಿರಿಸಬೇಕು.''

## ರಾಮನ ಆದೇಶದಿಂದ ಧರ್ಮಾರಣ್ಯದಲ್ಲಿ ಹನುಮಂತನ ನಿತ್ಯ ನಿವಾಸ

ಹೀಗೆ ಹೇಳಿ ಶ್ರೀರಾಮನು ಪ್ರಸನ್ನ ಮನಸ್ಸಿನಿಂದ ಕೋಟೆಗೋಡೆ, ದುರ್ಗದ ಉಪರಣಗಳ ಕಂದಕ, ಪ್ರಾಕಾರ, ಸರೋವರ, ಹೊಕ್ಕರಣಿ, ಧರ್ಮವಾಪಿ ಮುಂತಾದ ದೇವನಿರ್ಮಿತ ಕೂಪಗಳ ಪುನರ್ನಿರ್ಮಾಣ ಕಾರ್ಯಗಳನ್ನು ಮಾಡಿಸಿದನು. ಶ್ರೀರಾಮನ ಶಾಸನವನ್ನು ಅಲ್ಲಿ ತಾಮ್ರ ಪತ್ರದಲ್ಲಿ ಬರಿಸಿ ಇಡಲಾಗಿದೆ. ಅದರ ಉಲ್ಲಂಘನವನ್ನು ಅಥವಾ ಲೋಪವನ್ನು ಮಾಡಿದರೆ ಅವರ ಪೂರ್ವಜರು ನರಕದಲ್ಲಿ ಬೀಳುವರು. ಮತ್ತು ಇಲ್ಲಿ ಇದ್ದವರಿಗೆ ಸಂತಾನವು ಆಗುವುದಿಲ್ಲ. ಕೊನೆಗೆ ಶ್ರೀರಾಮನು ಹನುಮಂತನನ್ನು ಕರೆದು ''ವಾಯುನಂದನ, ಈ ಕ್ಷೇತ್ರ ನಿನ್ನದು, ನೀನು ಇಲ್ಲಿ ಇದ್ದರೆ, ಮುಂದೆ ಪೂಜೆ ನಡೆಯುವದು. ಈ ಕ್ಷೇತ್ರವನ್ನು ಆಜ್ಞೆಯನ್ನು ಶಿರಸಾ ಧರಿಸಿ ಹನುಮಂತನು ನಮಸ್ಕರಿಸಿದ. ಭಗವಂತನ ಆಜ್ಞೆಯಂತೆ ಅಲ್ಲಿಯೇ ವಾಸಮಾಡಿದ. ಹೀಗೆ ಶ್ರೀರಾಮಚಂದ್ರನು ಪ್ರಾರಂಭಿಸಿದ ಈ ಧರ್ಮಾರಣ್ಯ ತೀರ್ಥದ ಜೀರ್ಣೋದ್ಧಾರ ಮಾಡಿ, ಮಾರುತಿಯು ಶ್ರೀಮಾತೆಯ ಪೂಜೆಯನ್ನು ಮುಗಿಸಿ, ಬೇರೆ ತೀರ್ಥದಲ್ಲಿ ಸ್ನಾನ ಮಾಡಲು ಸಿದ್ಧನಾದ. ಬ್ರಹ್ಮಾದಿದೇವತೆಗಳು ಶ್ರೀರಾಮನಿಗೆ ಆಶೀರ್ವಾದ ಮಾಡಿ ತಮ್ಮ ತಮ್ಮ ಲೋಕಕ್ಕೆ ತೆರಳಿದರು.

## ರಾಮನಾಮದ ಮಹಿಮೆ, ಧರ್ಮಾರಣ್ಯ ಕ್ಷೇತ್ರದ ಮಾಹಾತ್ಮ್ಯ ಫಲ

**ವೇದವ್ಯಾಸ:-** 'ಹರೇ ರಾಮ ಹರೇ ರಾಮ ರಾಮರಾಮ ಹರೇ ಹರೇ' ಎಂಬ ಈ ರಾಮಮಂತ್ರವನ್ನು ಜಪಿಸುವವರಿಗೆ ದುಃಖ, ದೌರ್ಭಾಗ್ಯ, ಆಧಿವ್ಯಾಧಿಗಳ ಭಯ ಉಂಟಾಗುವುದಿಲ್ಲ. ರಾಮ ಎಂಬ ಹೆಸರನ್ನು ಉಚ್ಚರಿಸಿದ ಮಾತ್ರಕ್ಕೆ ಭಯಂಕರ ಪಾಪಗಳೆಲ್ಲವೂ ಬಿಟ್ಟು ಹೋಗುವವು.

ಹೀಗೆ ಶ್ರೀರಾಮಚಂದ್ರನು ತೀರ್ಥೋದ್ಧಾರದ ಕಾರ್ಯಾಂಗವಾಗಿ ನಡೆಸಿದ ಯಜ್ಞ ಕಾರ್ಯಗಳನ್ನೆಲ್ಲಮಾಡಿ ಮುಗಿಸಿದ. ಈ ಎಲ್ಲ ಪುಣ್ಯ ಕಾರ್ಯಗಳು ಮುಗಿದ ಬಳಿಕ ಇದರಲ್ಲಿ ಪೌರೋಹಿತ್ಯ ವಹಿಸಿದ ಎಲ್ಲ ಬ್ರಾಹ್ಮಣರಿಗೂ ಸಭಾಸದರಾಗಿ ಬಂದ ಎಲ್ಲ ಋಷಿಮುನಿಗಳಿಗೂ ಪ್ರದಕ್ಷಿಣೆ ನಮಸ್ಕಾರಾದಿಗಳನ್ನು ಹಾಕಿ ಹಸು ಕುದುರೆ ಎಮ್ಮೆ ರಥ ಮುಂತಾದ ಅನೇಕ ಬಗೆಯ ದಾನಗಳನ್ನು ನೀಡಿ ತನ್ನ ಸೈನ್ಯ ಸಹಿತವಾಗಿ ಅಯೋಧ್ಯಾ ರಾಜಧಾನಿಗೆ ಮರಳಿ ಆಗಮಿಸಿದ.

**ಧರ್ಮರಾಜ:-** ಮುನಿಗಳೇ, ಕಲಿಯುಗವು ಬಂದ ನಂತರ ಈ ಪ್ರಪಂಚದಲ್ಲಿ ಮತ್ತೆ ಯಾತರ ಭಯವು ಇರುತ್ತದೆ?

**ವೇದವ್ಯಾಸ:-** ರಾಜನೇ, ಕಲಿಯುಗದಲ್ಲಿ ಜನರು ಸುಳ್ಳು ಮಾತನಾಡುವವರೂ ಸಾಧು ಸಜ್ಜನರ ನಿಂದಕರೂ ಪಿತೃಭಕ್ತಿ ರಹಿತರೂ ಕಳವು ಕೊಲೆ ಸುಲಿಗೆಗಳನ್ನು ಮಾಡಿಸುವವರೂ ಸಗೋತ್ರ ವಿವಾಹಮಾಡಿಕೊಳ್ಳುವವರೂ ಶರಣಾಗತರನ್ನು ಸಂಹರಿಸುವವರೂ ಬ್ರಹ್ಮದ್ವೇಷಿಗಳೂ ಆಗುವರು. ಕಲಿಯುಗ ಬಂದ ಬಳಿಕ ಬ್ರಾಹ್ಮಣರೆಲ್ಲರೂ ವೇದಭ್ರಷ್ಟರಾಗುವರು. ಅಹಂಕಾರಿಗಳಾಗುವರು. ಮತ್ತು ಕೃಷಿ ಗೋರಕ್ಷ ವಾಣಿಜ್ಯ ಮುಂತಾದ ವೈಶ್ಯರಿಗೆ ವಿಹಿತವಾದ ವ್ಯಾಪಾರ ಉದ್ಯೋಗಗಳನ್ನು ಕೈಕೊಳ್ಳುವರು. ಶ್ರಾದ್ಧ, ತರ್ಪಣ, ವಿಷ್ಣು ಭಕ್ತಿ, ಸ್ನಾನ, ಸಂಧ್ಯೆ, ದೇವತಾ ಪೂಜೆ ಮುಂತಾದ ಎಲ್ಲ ಕಾರ್ಯಗಳು ಲೋಪವಾಗುವವು. ಹಿಂದೆ ಆಸ್ತಿಕರಾಗಿ ಇರುವ ಈ ಎಲ್ಲ ಬ್ರಾಹ್ಮಣರು ವಿಷ್ಣುಭಕ್ತಿ ರಹಿತರಾಗಿ ಎರಡನೆಯವರ ಹಣವನ್ನು ಎತ್ತಿ ಹಾಕುವರು. ಬ್ರಾಹ್ಮಣರು ಸ್ನಾನವಿಲ್ಲದೇ ಬರೀ ಭೋಜನಮಾಡುವರು. ಕ್ಷತ್ರಿಯರು ಯುದ್ಧದ ಹೆಸರನ್ನು ಹೇಳಿದ

ಮಾತ್ರಕ್ಕೆ ಹೆದರಿ ದೂರ ಓಡಿ ಹೋಗುವರು. ಎಲ್ಲರೂ ಮದ್ಯಪಾನ ಮಾಡಿ ವೇದಾಧಿಕಾರಿವನ್ನು ಕಳೆದು ಕೊಳ್ಳುವರು. ಸ್ತ್ರೀಯರೆಲ್ಲರೂ ಕಲಿಯುಗದಲ್ಲಿ ಪತಿಯೊಡನೆ ದ್ವೇಷಮಾಡುವರು. ಶೆರೆ ಕುಡಿಯುವ ಮತ್ತು ಯಜ್ಞಕ್ಕೆ ಅಧಿಕಾರವಿಲ್ಲದ ಜನರ ಕಡೆಯಿಂದ ಪುರೋಹಿತರು ಯಜ್ಞ ಮಾಡಿಸುವರು. ತಂದೆ, ತಾಯಿ, ಗಂಡ, ಹೆಂಡತಿ, ಅಣ್ಣ, ತಮ್ಮ ಮುಂತಾದವರಲ್ಲಿ ಪರಸ್ಪರ ಕಲಹ ಹಾಗೂ ವೈರಗಳು ಮೇಲಿಂದ ಮೇಲೆ ಉಂಟಾಗುವವು. ಬ್ರಾಹ್ಮಣರು ದ್ರವ್ಯವನ್ನು ಸಂಗ್ರಹಿಸಬೇಕು ಎಂಬ ಒಂದೇ ದೃಷ್ಟಿಯನ್ನು ಇಟ್ಟುಕೊಂಡು ಆಕಳ ಹಾಲು ಮೊಸರು ತುಪ್ಪ ಮಜ್ಜಿಗೆಗಳನ್ನು ಮಾರಾಟಮಾಡುವರು. ಈ ಕಲಿಯುಗದಲ್ಲಿ ಹಸುಗಳು ಪ್ರಾಯಃ ಹಾಲನ್ನು ಹಿಂಡುವುದಿಲ್ಲ. ಲೋಕದಲ್ಲಿ ಎಲ್ಲರೂ ಕನ್ಯೆಯನ್ನು ಮಾರಾಟಕ್ಕೆ ಇಡುವರು. ಹಸು ಮೇಕೆಗಳನ್ನು ಕೂಡ ಮಾರಿ ಹಾಕುವರು. ವಿಷವನ್ನು ಮತ್ತು ರಸವನ್ನು ಮಾರಾಟಮಾಡುವರು. ಬ್ರಾಹ್ಮಣರು ವೇದಗಳನ್ನು ಮಾರಿಕೊಳ್ಳುವರು. ಸ್ತ್ರೀಯರು ಹನ್ನೊಂದು ವರ್ಷದವರಿದ್ದಾಗಲೇ ಗರ್ಭಧಾರಣ ಮಾಡುವರು. ಯಾರೊಬ್ಬರೂ ಏಕಾದಶಿ ದಿನ ಉಪವಾಸಮಾಡುವದಿಲ್ಲ.

ತೀರ್ಥಯಾತ್ರೆ ಮಾಡಬೇಕೆಂದು ಬ್ರಾಹ್ಮಣರಿಗೆ ಬುದ್ಧಿಯೇ ಹುಟ್ಟುವುದಿಲ್ಲ. ವಾಮ ಮಾರ್ಗದಿಂದ ಕುಟಿಲ ವೃತ್ತಿಯಿಂದ ಉಪಜೀವನವನ್ನು ಮಾಡುತ್ತಲಿರುವ ಈ ಜನರು ವೇದಶಾಸ್ತ್ರಗಳ ನಿಂದೆಯಲ್ಲಿಯೇ ಹೊತ್ತು ಕಳೆಯುವರು. ಸನ್ಯಾಸಿಗಳ ನಿಂದೆ ಮತ್ತು ಅವಹೇಳನಗಳು ಸಾಮಾನ್ಯವಾಗಿ ಎಲ್ಲ ಕಡೆಗೂ ಕಂಡು ಬರುವವು. ಕಲಿಯುಗದಲ್ಲಿ ಸ್ಪಶ್ಯಾಸ್ಪೃಶ್ಯ ವಿಚಾರವೇ ಲೋಪವಾಗುವದು. ಕಲಿಯುಗದಲ್ಲಿ ಮ್ಲೇಂಛ ರಾಜರು ಆಗಮಿಸಿ ರಾಜ್ಯಾಧಿಕಾರವನ್ನು ನಡೆಸುವರು. ಪ್ರಾಯಃ ಎಲ್ಲ ಜನರೂ ಮುಂದೆ ಕಲಿಯುಗದಲ್ಲಿ ವಿಶ್ವಾಸ ಘಾತಕರೂ ಮಿತ್ರ ದ್ರೋಹಿಗಳೂ ಗುರುದ್ರೋಹಿಗಳೂ ಶಿಶ್ನೋದರ ಪರಾಯಣರೂ ಆಗುವರು. ಎಲ್ಲ ಜಾತಿ ವರ್ಣಸಂಕರವಾಗಿ ಎಲ್ಲ ಬ್ರಾಹ್ಮಣರೂ ಸ್ಥಾನ ಭ್ರಷ್ಟರೂ ವೇದಭ್ರಷ್ಟರೂ ಆಗುವರು.

ಪೂರ್ವಕಾಲದಲ್ಲಿ ಹರಿಹರ ಬ್ರಹ್ಮಾದಿ ದೇವತೆಗಳು ಸ್ಥಾಪನೆಮಾಡಿದ ಈ ತೀರ್ಥದ ಹೆಸರು ಕೃತಯುಗದಲ್ಲಿ ಧರ್ಮಾರಣ್ಯ, ತ್ರೇತಾಯುಗದಲ್ಲಿ ಸತ್ಯಮಂದಿರ, ದ್ವಾಪರದಲ್ಲಿ ವೇದಭವನ, ಕಲಿಯುಗದಲ್ಲಿ ಮೋಹೇರಕ ಎಂದು ಬೇರೆ ಬೇರೆಯೇ ಆಗುವುದು. ಈ ಧರ್ಮಾರಣ್ಯದ ಮಾಹಾತ್ಮ್ಯವನ್ನು ಭಕ್ತಿಯಿಂದ ಕೇಳಿದವರು ಮತ್ತು ಹೇಳಿದವರು ಭಗವಂತನ ಅನುಗ್ರಹಕ್ಕೆ ಪಾತ್ರರಾಗಿ ದಿವ್ಯಗತಿಯನ್ನು ಹೊಂದುವರು. ಈ ಧರ್ಮಾರಣ್ಯ ಮಾಹಾತ್ಮ್ಯದ ಪುಸ್ತಕವನ್ನು ರೇಶ್ಮೆ ಬಟ್ಟೆಯಲ್ಲಿ ಸುತ್ತಿ ಗಂಧ ಪುಷ್ಪಾಕ್ಷತೆಗಳಿಂದ ಪೂಜೆಮಾಡಬೇಕು. ಈ ಕಥೆಯನ್ನು ಹೇಳಿದ ವಾಚಕನಿಗೆ ಕಥಾಸಮಾಪ್ತಿಯಾದ ನಂತರ ಪೂಜೆಯನ್ನು ಮಾಡಬೇಕು. ಮತ್ತು ವಸ್ತ್ರ ಗಂಧಮಾಲೆಗಳಿಂದ ದೇವರಂತೆ ಈ ಪುರಾಣ ಪ್ರವಚನಕಾರರನ್ನು ಪೂಜೆಮಾಡಿ ಪುರಾಣ ಹೇಳುವವರಿಗೆ ಒಂದು ಹಿಂಡುವ ಹಸುವನ್ನು ದಾನಕೊಡಬೇಕು.

*ಇತಿ ಸ್ಕಂದಮಹಾಪುರಾಣ-ಬ್ರಹ್ಮಖಂಡದಲ್ಲಿನ*

*ದರ್ಮಾರಣ್ಯಖಂಡ ಅಧ್ಯಾಯ ೭೮ರಲ್ಲಿ ಸಂಪೂರ್ಣ*

—○—